ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಗುರುವಾರ, ದಿನಾಂಕ: 18ನೇ ಜುಲೈ, 2019

ವಾಣಿಜ್ಯ ತೆರಿಗೆ ಇಲಾಖೆಯ ನೇರ ನೇಮಕಾತಿ ನೌಕರರಿಗೆ ಬಡ್ತಿಯಲ್ಲಿ ನ್ಯಾಯ ಒದಗಿಸುವ ಬಗ್ಗೆ

ಶ್ರೀ ಎಸ್. ವ್ಹಿ. ಸಂಕನೂರ (ಪದವೀಧರರ ಕ್ಷೇತ್ರ) :-

338 (361) ಮಾನ್ಯ ಮುಖ್ಯಮಂತ್ರಿಯವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) 01-07-1984ರ ನಂತರ ವಾಣಿಜ್ಯ ತೆರಿಗೆ ಇಲಾಖೆಯಲ್ಲಿ ದಿನಗೂಲಿ ನೌಕರರಾಗಿ ಸೇರಿದ ನೌಕರರಿಗೆ ಸುಪ್ರೀಂಕೋರ್ಟ್ ಆದೇಶ ಸಂಖ್ಯೆ: ಸಿಎ ನಂ: 3595-3612/1999, ದಿನಾಂಕ: 10-04-2006ರಂತೆ ಸಕ್ರಮಾತಿಗೆ ನಿಗದಿಪಡಿಸಿದ್ದ ಮಾನದಂಡಗಳೇನು ;

(ಆ) ಈ ಆದೇಶದ ಪ್ಯಾರಾ ನಂ.46 ರಲ್ಲಿ ವಾಣಿಜ್ಯ ತೆರಿಗೆ ಇಲಾಖೆಗೆ ನಿರ್ದಿಷ್ಟವಾಗಿ ನಿಗದಿಪಡಿಸಲಾಗಿದ್ದ ಮಾನದಂಡಗಳ ವಿರುದ್ಧವಾಗಿ ಸಕ್ರಮಾತಿ ಮಾಡಲಾಗಿದೆಯೇ ; ಮಾಡಿದ್ದಲ್ಲಿ, ಕಾರಣಗಳೇನು ;

(ಇ) ಸಕ್ರಮಾತಿಯಲ್ಲಿ 10-04-2006ರ ತೀರ್ಪಿನ ಉಲ್ಲಂಘನೆಯಾಗಿದ್ದು, ಇದನ್ನು ಸರಿಪಡಿಸುವ ಬಗ್ಗೆ ಆರ್ಥಿಕ ಇಲಾಖೆಯ ನಂ. ಆಇ 97 ವಾತೆಸಿ 2008, ದಿನಾಂಕ: 22-04-2008 ರಂದು ಪತ್ರ ಬರೆದಿದೆಯೇ ; ಹಾಗಿದ್ದಲ್ಲಿ, ಸರಿಪಡಿಸಲು ಕೈಗೊಂಡ ಕ್ರಮ ಹಾಗೂ ಪತ್ರದ ಪ್ರತಿ ನೀಡುವುದು;

(ಈ) ಸುಪ್ರೀಂ ಕೋರ್ಟ್ ಆದೇಶ ಉಲ್ಲಂಘಿಸಿ ದಿನಗೂಲಿ ನೌಕರರಿಗೆ ಹಿಂದಿನ ದಿನಾಂಕಕ್ಕೆ ಜೇಷ್ಠತೆಯನ್ನು ನಿಗದಿಪಡಿಸಿ ಸಕ್ರಮಾತಿ ಮಾಡಿರುವ ಲೋಪವನ್ನು ಸರಿಪಡಿಸಬೇಕೆಂದು ಪ್ರಕರಣ ಸಂಖ್ಯೆ; 131/2016 (ಸೇವೆ)ರಲ್ಲಿ ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳ ಮತ್ತು ಅನುಸೂಚಿತ ಬುಡಕಟ್ಟುಗಳ ಆಯೋಗದಿಂದ ತೀರ್ಪು ನೀಡಿರುವುದು ನಿಜವೇ ; (ಇದ್ದಲ್ಲಿ, ತೀರ್ಪಿನ ಪ್ರತಿ ಒದಗಿಸುವುದು)

(ಉ) ಸದರಿ ಆಯೋಗದ ತೀರ್ಪಿನನ್ವಯ ಕ್ರಮ ಕೈಗೊಳ್ಳಲು ವಾಣಿಜ್ಯ ತೆರಿಗೆ ಇಲಾಖೆಯ ಯಾವ ದಿನಾಂಕದಂದು ಆರ್ಥಿಕ ಇಲಾಖೆಗೆ ಅಭಿಪ್ರಾಯ ಕೋರಿದೆ ; ಅಭಿಪ್ರಾಯ ನೀಡಲು ವಿಳಂಬವಾಗುತ್ತಿರಲು ಕಾರಣಗಳೇನು ; ಯಾವ ಕಾಲಮಿತಿಯೊಳಗೆ ಅಭಿಪ್ರಾಯ ನೀಡಿ ನೇರ ನೇಮಕಾತಿಯಾದ ನೌಕರರಿಗೆ ನ್ಯಾಯವನ್ನು ಒದಗಿಸಲಾಗುವುದು ? (ಪ್ರತಿ ನೀಡುವುದು)